# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 33
ಸದಸ್ಯರ ಹೆಸರು : ಶ್ರೀ ರಘುನಾಥ್ ರಾವ್ ಮಲ್ಕಾಪೂರೆ
ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸುವ ದಿನಾಂಕ : 29.01.2021

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಜುಲೈ-2020 ರಿಂದ ಡಿಸೆಂಬರ್ ಅಂತ್ಯದವರೆಗೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ಚಾಲಕರು ಬಸ್ ಚಾಲನೆ ಮಾಡುವ ವೇಳೆ ತಮ್ಮ ಮೊಬೈಲ್ ಫೋನ್ ಬಳಕೆ ಮಾಡಿ ಕರ್ತವ್ಯ ಲೋಪ ಎಸೆಗಿರುವ ಎಷ್ಟು ಪ್ರಕರಣಗಳನ್ನು ಪತ್ತೆಹಚ್ಚಲಾಗಿದೆ.(ಡಿಪೋವಾರು ಚಾಲಕರ ಹೆಸರು ಸಹಿತ ವಿವರ ನೀಡುವುದು) | ಜುಲೈ-2020 ರಿಂದ ಡಿಸೆಂಬರ್ ಅಂತ್ಯದವರೆಗೆ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯಲ್ಲಿ ಚಾಲಕರು ಬಸ್ ಚಾಲನೆ ಮಾಡುವ ವೇಳೆ ತಮ್ಮ ಮೊಬೈಲ್ ಫೋನ್ ಬಳಕೆ ಮಾಡಿ ಕರ್ತವ್ಯ ಲೋಪ ಎಸೆಗಿರುವ 22 ಪ್ರಕರಣಗಳಿದ್ದು, ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಆ | ಈ ರೀತಿಯ ಕರ್ತವ್ಯ ಲೋಪ ಎಸೆಗಿರುವ ಚಾಲಕರ ವಿರುದ್ಧ ಸಂಸ್ಥೆ ಯಾವ ನಿಯಮದಡಿ ಏನು ಕ್ರಮ ಕೈಗೊಳ್ಳಲಿದೆ; | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ (ನಡತೆ ಮತ್ತು ಶಿಸ್ತು) ನಿಯಮಾವಳಿ, 1971 ಹಾಗೂ ಈ ಬಗ್ಗೆ ಬೆಂ.ಮ.ನ.ಸಾ.ಸಂಸ್ಥೆ ಯಿಂದ ಹೊರಡಿಸಿದ ಸುತ್ತೋಲೆ ಸಂಖ್ಯೆ:512/2020ರನ್ವಯ ಕರ್ತವ್ಯ ಲೋಪ ಎಸೆಗಿರುವ ಚಾಲಕರ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತದೆ. |
| ಇ | ಬಸ್‌ನಲ್ಲಿ ಪ್ರಯಾಣಿಸುವ ಪ್ರಯಾಣಿಕರ ಜವಾಬ್ದಾರಿ ಚಾಲಕರ ಮೇಲಿದ್ದು, ಚಾಲಕರು ಈ ರೀತಿ ಮೊಬೈಲ್ ಫೋನ್ ಬಳಕೆ ಮಾಡಿ ಪ್ರಯಾಣಿಕರ ಜೀವನದ ಜೊತೆ ಚಲ್ಲಾಟ ಆಡುವ ಈ ಉದ್ದಟತನವನ್ನು ಕೊನೆಗಾಣಿಸುವ ಅಗತ್ಯವಿದ್ದು, ಸರ್ಕಾರ ಕೈಗೊಳ್ಳುವ ಕ್ರಮಗಳಾವುವು; | ಬೆಂ.ಮ.ನ.ಸಾ.ಸಂಸ್ಥೆ ಯಿಂದ ಹೊರಡಿಸಿದ ಸುತ್ತೋಲೆ ಸಂಖ್ಯೆ:512/2020 ರಲ್ಲಿನ ನಿರ್ದೇಶನದಂತೆ ಮೊಬೈಲ್ ಪ್ರಕರಣಗಳಲ್ಲಿ ಕೆಂಪು ಗುರುತಿನ ಪ್ರಕರಣ (RMC)ವೆಂದು ದಾಖಲಿಸಿಕೊಂಡು, ನೌಕರರಿಗೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ (ನಡತೆ ಮತ್ತು ಶಿಸ್ತು) ನಿಯಮಾವಳಿ, 1971ರ ನಿಯಮ, 22 ರಡಿಯಲ್ಲಿ ಆಪಾದನಾ ಪತ್ರವನ್ನು ಜಾರಿ ಮಾಡಿ, ನಿಯಮ 18 (ಎ) ರನ್ವಯ ಸೂಕ್ತ ಶಿಸ್ತು ಕ್ರಮ ಕೈಗೊಳ್ಳಲಾಗುತ್ತಿದೆ ಹಾಗೂ ಕಡ್ಡಾಯವಾಗಿ ಘಟಕ ಬದಲಾಯಿಸಿ ವರ್ಗಾವಣೆ ಮಾಡಲಾಗುತ್ತಿದೆ. |
| ಈ | ಮೇಲ್ಕಂಡ ಅವಧಿಯಲ್ಲಿ ಪತ್ತೆಹಚ್ಚಲಾದ ಪ್ರಕರಣಗಳಲ್ಲಿ ಎಷ್ಟು ಜನ ಚಾಲಕರ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; (ಡಿಪೋವಾರು ಚಾಲಕರ ಹೆಸರು ಸಹಿತ ವಿವರ ನೀಡುವುದು) ಕ್ರಮ ಕೈಗೊಳ್ಳದೇ ಇದ್ದಲ್ಲಿ ಕಾರಣಗಳೇನು; ಎಷ್ಟು ಸಮಯದಲ್ಲಿ ಅಂತಹ ಚಾಲಕರ ವಿರುದ್ಧ ಕ್ರಮ ಕೈಗೊಳ್ಳಲಾಗುವುದು; | ಮೇಲ್ಕಂಡ ಅವಧಿಯಲ್ಲಿ ಕರ್ತವ್ಯದ ವೇಳೆಯಲ್ಲಿ ಮೊಬೈಲ್ ಫೋನ್ ಸಂಭಾಷಣೆ ಮಾಡಿರುವ ಚಾಲಕರುಗಳ ವಿರುದ್ಧ ಕ್ರಮ ಕೈಗೊಂಡಿರುವ ವಿವರಗಳನ್ನು **ಅನುಬಂಧದಲ್ಲಿ** ಒದಗಿಸಲಾಗಿದೆ ಹಾಗೂ ಸಂಸ್ಥೆಯ ಸಾಮಾನ್ಯ ಸ್ಥಾಯಿ ಆದೇಶ ಸಂಖ್ಯೆ: 26/2020-21, ದಿನಾಂಕ 30-11-2020 ರಲ್ಲಿನ ಮಾರ್ಗಸೂಚಿ ಸಂ. 6 ರಲ್ಲಿನ ನಿರ್ದೇಶನದಂತೆ ಕೆಂಪು ಗುರುತಿನ ಪ್ರಕರಣಗಳನ್ನು 03 ತಿಂಗಳ ಅವಧಿಯೊಳಗೆ ಇತ್ಯರ್ಥಪಡಿಸಲು ನಿರ್ದೇಶಿಸಲಾಗಿದ್ದು, ಅದರಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |

...2

| | | |
|---|---|---|
| ಉ | ಚಾಲಕರ ವಿರುದ್ಧ ಕ್ರಮ ಕೈಗೊಳ್ಳುವಲ್ಲಿ ಹಿರಿಯ ಅಧಿಕಾರಿಗಳು ವಿಳಂಬ ಧೋರಣೆ ಅನುಸರಿಸುತ್ತಿರುವುದು ಅಥವಾ ಚಾಲಕರ ಜೊತೆ ಶಾಮೀಲಾಗಿ ಕ್ರಮ ಕೈಗೊಳ್ಳದೇ ಇರುವ ಸಾಧ್ಯತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? | ಸಂಸ್ಥೆಯಲ್ಲಿ ಚಾಲಕರ ವಿರುದ್ಧ ಕ್ರಮ ಕೈಗೊಳ್ಳುವಲ್ಲಿ ಹಿರಿಯ ಅಧಿಕಾರಿಗಳು ವಿಳಂಬ ಧೋರಣೆ ಅನುಸರಿಸುತ್ತಿರುವ ಕುರಿತು ಯಾವುದೇ ವರದಿ/ದೂರುಗಳನ್ನು ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ: ಟಿಡಿ 06 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು

ಅನುಬಂಧ - 01



# ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ: ಕೇಂದ್ರ ಕಛೇರಿ : ಬೆಂಗಳೂರು

## ಬೆಂಮಸಾಸಂಸ್ಥೆಯಲ್ಲಿ ಜುಲೈ-2020 ರಿಂದ ಡಿಸೆಂಬರ್-2020 ರವರೆಗೆ ದಾಖಲಾದ ಚಾಲಕರ ವಿರುದ್ಧ ವಾಹನ ಚಾಲನೆ ಮಾಡುವಾಗ ಮೊಬೈಲ್ ಪೋನ್ ಬಳಸಿರುವ ಪ್ರಕರಣಗಳ ವಿವರ

| ಕ್ರ ಸಂ | ವಲಯ | ಘಟಕ | ಶ್ರೀಯುತರ ಹೆಸರು | ಹುದ್ದೆ | ಬಿಲ್ಲೆ ಸಂಖ್ಯೆ | ಪ್ರಕರಣ ಜರುಗಿದ ದಿನಾಂಕ | ಪ್ರಕರಣದ ಪ್ರಸ್ತುತ ಹಂತ / ತೆಗೆದುಕೊಂಡ ಕ್ರಮದ ವಿವರ |
|---|---|---|---|---|---|---|---|
| 1 | ದಕ್ಷಿಣ | 3 | ಪ್ರಭು ಟಿ ಎಂ | ತರಬೇತಿ ಚಾಲಕ | 25411 | 21-12-20 | ಕಾರಣ ಕೇಳುವ ಸೂಚನಾ ಪತ್ರ ನೀಡಲಾಗಿದೆ, ಹಾಗೂ ಘಟಕ-34 ಕ್ಕೆ ವರ್ಗಾಯಿಸಲಾಗಿದೆ |
| 2 | ದಕ್ಷಿಣ | 33 | ತಿಪ್ಪಣ್ಣ ಬಿರಾದರ್ | ಚಾಲಕ | 21161 | 01-12-20 | ಆರೋಪಣಾ ಪತ್ರ ನೀಡಲಾಗಿದೆ ಹಾಗೂ ಘಟಕ-34 ಕ್ಕೆ ವರ್ಗಾಯಿಸಲಾಗಿದೆ |
| 3 | ದಕ್ಷಿಣ | 44 | ಚಿದಾನಂದ | ಚಾಲಕ | 17154 | 12-10-20 | ರೂ.5000-00/10 ಕಂತುಗಳಲ್ಲಿ ವೇತನದಲ್ಲಿ ಕಡಿತಗೊಳಿಸಲಾಗಿದೆ. |
| 4 | ಪಶ್ಚಿಮ | 35 | ಶ್ರೀನಿವಾಸ ಕೆ | ಚಾಲಕ | 21002 | 04-11-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-31 ಕ್ಕೆ ವರ್ಗಾಯಿಸಲಾಗಿದೆ |
| 5 | ಪಶ್ಚಿಮ | 17 | ವಿಜಯ್ ಕುಮಾರ್ ಬಿ.ಎಸ್. | ಚಾಲಕ | 20455 | 06-11-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-16 ಕ್ಕೆ ವರ್ಗಾಯಿಸಲಾಗಿದೆ |
| 6 | ಪಶ್ಚಿಮ | 16 | ಧನುಂಜಯ್ | ಚಾಲಕ | 22814 | 30-11-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-36 ಕ್ಕೆ ವರ್ಗಾಯಿಸಲಾಗಿದೆ |
| 7 | ಪಶ್ಚಿಮ | 37 | ರವಿಕುಮಾರ್ ಜಿ.ಎಸ್, | ಚಾಲಕ | 24652 | 07-12-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-16 ಕ್ಕೆ ವರ್ಗಾಯಿಸಲಾಗಿದೆ |
| 8 | ಪಶ್ಚಿಮ | 31 | ವಾಸುದೇವ | ಚಾಲಕ | 13665 | 10-12-20 | ಆರೋಪಣಾ ಪತ್ರ ನೀಡಲಾಗಿದೆ ಹಾಗೂ ಘಟಕ-12 ಕ್ಕೆ ವರ್ಗಾಯಿಸಲಾಗಿದೆ |
| 9 | ಪಶ್ಚಿಮ | 31 | ನಾಗರಾಜು ಹೆಚ್. ಆರ್ | ಚಾಲಕ | 12953 | 29-12-20 | ಆರೋಪಣಾ ಪತ್ರ ನೀಡಲಾಗಿದೆ ಹಾಗೂ ಘಟಕ-35 ಕ್ಕೆ ವರ್ಗಾಯಿಸಲಾಗಿದೆ |
| 10 | ಪೂರ್ವ | 27 | ಜಾಫರ್ ಶರೀಫ್ | ಚಾಲಕ | 14109 | 23-11-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-32 ಕ್ಕೆ ವರ್ಗಾಯಿಸಲಾಗಿದೆ |
| 11 | ಪೂರ್ವ | 6 | ರಾಜ್‌ಕುಮಾರ್ ಎಂ | ಚಾಲಕ | 16354 | 09-11-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-19 ಕ್ಕೆ ವರ್ಗಾಯಿಸಲಾಗಿದೆ |
| 12 | ಪೂರ್ವ | 38 | ಅಶೋಕ್ ಭಾಳಪ್ಪ | ತರಬೇತಿ ಚಾಲಕ | 21802 | 20-11-20 | ಕಾರಣ ಕೇಳುವ ಸೂಚನಾ ಪತ್ರ ಪತ್ರ ನೀಡಲಾಗಿದೆ, ಹಾಗೂ ಘಟಕ-27 ಕ್ಕೆ ವರ್ಗಾಯಿಸಲಾಗಿದೆ |
| 13 | ಪೂರ್ವ | 38 | ಶಿವಣ್ಣ | ತರಬೇತಿ ಚಾಲಕ | 24824 | 04-11-20 | ಕಾರಣ ಕೇಳುವ ಸೂಚನಾ ಪತ್ರ ನೀಡಲಾಗಿದೆ, ಘಟಕ-32 ಕ್ಕೆ ವರ್ಗಾಯಿಸಲಾಗಿದೆ |
| 14 | ಪೂರ್ವ | 19 | ಮಹೇಂದ್ರ ಎಂ | ಚಾಲಕ | 14885 | 18-12-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-32 ಕ್ಕೆ ವರ್ಗಾಯಿಸಲಾಗಿದೆ |
| 15 | ಪೂರ್ವ | 41 | ಸಿದ್ದಪ್ಪ ಸರಪಗಿ | ಚಾಲಕ | 17681 | 25-12-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-32 ಕ್ಕೆ ವರ್ಗಾಯಿಸಲಾಗಿದೆ |
| 16 | ಪೂರ್ವ | 6 | ಶ್ರೀನಿವಾಸ ಮೂರ್ತಿ | ಚಾಲಕ | 23968 | 28-12-20 | ಆರೋಪಣಾ ಪತ್ರ ನೀಡಲಾಗಿದೆ, ಹಾಗೂ ಘಟಕ-27 ಕ್ಕೆ ವರ್ಗಾಯಿಸಲಾಗಿದೆ |
| 17 | ಪೂರ್ವ | 38 | ನಾಗರಾಜು | ತರಬೇತಿ ಚಾಲಕ | 24832 | 24-12-20 | ಕಾರಣ ಕೇಳುವ ಸೂಚನಾ ಪತ್ರ ಜಾರಿಯಾಗಿದ್ದು, ಹಾಗೂ ಘಟಕ-32 ಕ್ಕೆ ವರ್ಗಾಯಿಸಲಾಗಿದೆ |
| 18 | ಉತ್ತರ | 9 | ಸಲೀಂ | ಚಾಲಕ | 15686 | 11-10-20 | ಶಿಸ್ತು ಪ್ರಕ್ರಿಯೆ ಜಾರಿಯಲ್ಲಿರುತ್ತದೆ |
| 19 | ಉತ್ತರ | 30 | ನಾಗೇಂದ್ರ | ಚಾಲಕ | 20069 | 20-10-20 | ಶಿಸ್ತು ಪ್ರಕ್ರಿಯೆ ಜಾರಿಯಲ್ಲಿರುತ್ತದೆ |
| 20 | ಉತ್ತರ | 11 | ಅಬ್ದುಲ್ ಶರೀಫ್ | ಚಾಲಕ | 10592 | 17-12-20 | ಶಿಸ್ತು ಪ್ರಕ್ರಿಯೆ ಜಾರಿಯಲ್ಲಿರುತ್ತದೆ |
| 21 | ಈಶಾನ್ಯ | 10 | ಕೆ. ವಿ ಹೊನ್ನೇಗೌಡ | ಚಾಲಕ-ಕಂ- | 9470 | 28-12-20 | ಶಿಸ್ತು ಪ್ರಕ್ರಿಯೆ ಜಾರಿಯಲ್ಲಿರುತ್ತದೆ |
| 22 | ಈಶಾನ್ಯ | 14 | ಲೋಕನಾಯಕ್ | ಚಾಲಕ | 20798 | 31-12-20 | ಶಿಸ್ತು ಪ್ರಕ್ರಿಯೆ ಜಾರಿಯಲ್ಲಿರುತ್ತದೆ |

/ ಮುಖ್ಯ ಸಿಬ್ಬಂದಿ ವ್ಯವಸ್ಥಾಪಕರು
ಬೆಂಮಸಾಸಂಸೆ, ಕೇಂದ್ರ ಕಛೇರಿ